## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : **519**

ಸದಸ್ಯರ ಹೆಸರು : **ಶ್ರೀ ಕೆ.ಹರೀಶ್ ಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು)**

ಉತ್ತರಿಸಬೇಕಾದ ದಿನಾಂಕ : **24-09-2020**

ಉತ್ತರಿಸುವ ಸಚಿವರು : **ಮುಖ್ಯಮಂತ್ರಿಗಳು**

***

| | ಪ್ರಶ್ನೆ | ಉತ್ತರಗಳು |
|---|---|---|
| ಅ) | ಮೆಸ್ಕಾಂ ವ್ಯಾಪ್ತಿಯಲ್ಲಿ ಸುಮಾರು 10 ರಿಂದ 15 ವರ್ಷಗಳ ಕಾಲ ಮೀಟರ್ ರೀಡರ್‌ಗಳಾಗಿ ಹೊರಗುತ್ತಿಗೆ ಕೆಲಸ ನಿರ್ವಹಿಸುತ್ತಿದ್ದ ಕಾರ್ಮಿಕರನ್ನು ಕೆಲಸದಿಂದ ಕೈಬಿಡುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ? ಈ ಕುರಿತಂತೆ ಸರ್ಕಾರ ಕೈಗೊಂಡ ಕ್ರಮಗಳೇನು; (ಮಾಹಿತಿ ಒದಗಿಸುವುದು) | ಮಂಗಳೂರು ವಿದ್ಯುತ್ ಸರಬರಾಜು ಕಂಪನಿಯು 2009 ರಿಂದ ಮಾಪಕ ಓದುವಿಕೆ ಚಟುವಟಿಕೆ ಕಾರ್ಯವನ್ನು ಹೊರಗುತ್ತಿಗೆ ಮೂಲಕ ನಿರ್ವಹಿಸಿಕೊಳ್ಳಲು ಏಜೆನ್ಸಿ/ಸಂಸ್ಥೆಯನ್ನು ಗೊತ್ತುಪಡಿಸಿಕೊಳ್ಳಲು ಸೇವಾ ಟೆಂಡರ್ ಆಹ್ವಾನಿಸಿದೆಯೇ ಹೊರತು ನೇರವಾಗಿ ಮೀಟರ್ ರೀಡರ್ ಅನ್ನು ಮಂ.ವಿ.ಸ.ಕಂ. ನಿಯೋಜಿಸಿಕೊಂಡಿರುವುದಿಲ್ಲ.<br>ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯಲ್ಲಿ ಮಾಪಕ ಓದುಗ ಪದವೃಂದದಲ್ಲಿ ಹುದ್ದೆಗಳು ಭರ್ತಿಯಾಗದೇ ಖಾಲಿ ಇರುವ ಹಿನ್ನಲೆಯಲ್ಲಿ ಅವಶ್ಯವಾದ ಮಾಪಕ ಓದುವಿಕೆ ಚಟುವಟಿಕೆ ಕಾರ್ಯವನ್ನು ಹೊರಗುತ್ತಿಗೆ ಮೂಲಕ ನಿರ್ವಹಿಸಿಕೊಳ್ಳಲು ಕಾಲಕಾಲಕ್ಕೆ ವಿಭಾಗವಾರು/ ಉಪವಿಭಾಗವಾರು ಟೆಂಡರ್ ಆಹ್ವಾನಿಸಿ ದರ ಗುತ್ತಿಗೆ ಆಧಾರದಲ್ಲಿ ಸೇವೆಯನ್ನು ಪಡೆಯಲು ಗುತ್ತಿಗೆ ಏಜೆನ್ಸಿಯನ್ನು ಗೊತ್ತುಪಡಿಸಿಕೊಂಡಿರುತ್ತದೆ. ಸದರಿ ಗುತ್ತಿಗೆ ಏಜೆನ್ಸಿಗೆ ಒದಲಾದ ಪ್ರತಿ ಸ್ಥಾವರಕ್ಕೆ ದರವನ್ನು ಮಾಸಿಕವಾಗಿ ನಿಗದಿಗೊಳಿಸಿದ್ದು, ಅದರಂತೆ ಪಾವತಿಸಲಾಗುತ್ತಿದೆ.<br>ಪ್ರಸಕ್ತ ಸಾಲಿನಲ್ಲಿ ಮಾಪಕ ಓದುವಿಕೆ ಚಟುವಟಿಕೆಗೆ ಸಂಬಂಧಿಸಿದಂತೆ ವಿಭಾಗಾವಾರು ಸೇವಾ ಟೆಂಡರ್ ಆಹ್ವಾನಿಸಿ, ಗುತ್ತಿಗೆ ದರ ಹಾಗೂ ಸಂಸ್ಥೆ/ಏಜನ್ಸಿಯನ್ನು ಗೊತ್ತುಪಡಿಸಿಕೊಳ್ಳಲಾಗಿದ್ದು, ಅವುಗಳ ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ.<br>ಟೆಂಡರಿನ ನಿಯಮಾವಳಿಯನ್ವಯ. ಗುತ್ತಿಗೆ ಏಜೆನ್ಸಿ/ಸಂಸ್ಥೆಯು ಸದರಿ ಚಟುವಟಿಕೆಗೆ ಸಂಬಂಧಿಸಿದಂತೆ ಅವಶ್ಯವಿರುವ ಮಾನವ ಸಂಪನ್ಮೂಲಗಳನ್ನು ಪಡೆಯುವುದು ಹಾಗೂ ತಮ್ಮ ಉದ್ಯೋಗಿಗಳಿಗೆ ಚಾಲ್ತಿಯ್ಲಲ್ಲಿರುವ ಕನಿಷ್ಟ ವೇತನ ಕಾಯ್ದೆ ಮತ್ತು ಕಾರ್ಮಿಕ ಕಾನೂನುಗಳ ಪ್ರಕಾರ ಮಾಸಿಕ ವೇತನ, ಪ್ರಾವಿಡೆಂಟ್ ಫಂಡ್, ಇಎಸ್ಐ, ಗ್ರೂಪ್ ಇನ್ಸುರೆನ್ಸ್ ಮುಂತಾದ ಶಾಸನಬದ್ಧ ಪಾವತಿಗಳನ್ನು ಪಾವತಿಸುವ ಭಾಧ್ಯತೆಯು ಗುತ್ತಿಗೆ ಸಂಸ್ಥೆಯಾದ್ದಾಗಿರುತ್ತದೆ.<br>ಮಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಗುತ್ತಿಗೆ ಕಾರ್ಯಾದೇಶದನ್ವಯ ಗುತ್ತಿಗೆದಾರರಿಗೆ ವಹಿಸಲಾದ ಒಟ್ಟು ಸ್ಥಾವರಗಳಿಗನುಗುಣವಾಗಿ ಮಾನವ ಸಂಪನ್ಮೂಲವನ್ನು ನಿಯೋಜಿಸಿಕೊಳ್ಳುವುದು ಗುತ್ತಿಗೆ ಏಜೆನ್ಸಿ/ಸಂಸ್ಥೆಯ ಪರಿವ್ಯಾಪ್ತಿಗೆ ಒಳಪಟ್ಟಿರುತ್ತದೆ. |

**ಸಂಖ್ಯೆ:** ಎನರ್ಜಿ 180 ಇಬಿಎಸ್ 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಕೆ.ಹರೀಶ್ ಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 519 ಅನುಬಂಧ

ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಮಾಪಕ ಓದುವಿಕೆ ಚಟುವಟಿಕೆಗೆ ಸಂಬಂಧಿಸಿದಂತೆ ಆಹ್ವಾನಿಸಲಾದ ಸೇವಾ ಟೆಂಡರ್ ನ ವಿವರಗಳು

| ಕ್ರ.ಸಂ | ವಿಭಾಗದ ಹೆಸರು | ಟೆಂಡರ್ ವಿಚಾರಣೆ ಸಂಖ್ಯೆ: MESCOM/SEE(COML)/20-21/ ದಿನಾಂಕ | ಸಂಸ್ಥೆಯ ಹೆಸರು | ಓದಬೇಕಾದ ಅಂದಾಜು ಸ್ಥಾವರಗಳ ಸಂಖ್ಯೆ | ಮಾಸಿಕವಾಗಿ ಪ್ರತಿ ಸ್ಥಾವರ ಓದುವಿಕೆಗೆ ನಿಗಧಿಪಡಿಸಿದ ದರ ರೂ.ಗಳಲ್ಲಿ (ಜಿ.ಎಸ್.ಟಿ ಸೇರಿ) | ಕಾರ್ಯಾದೇಶ ಸಂಖ್ಯೆ MESCOM/SEE(COML) / EE(HVCM)/2020-21 ದಿನಾಂಕ |
|---|---|---|---|---|---|---|
| 1 | ಮಂಗಳೂರು | 896 ದಿನಾಂಕ: 17.04.2020 | ಮೆ\|\| ರಚನಾ ಎಂಟರ್ಪ್ರೈಸಸ್, ತಿಬ್ಲೆಪದವು, ಮಂಗಳೂರು | 53613 | 11.92 | 4967-77 dtd 03.08.2020 |
| 2 | ಕಾವೂರು | 897 ದಿನಾಂಕ: 17.04.2020 | ಮೆ\|\| ಪ್ರಸನ್ನ ಟೆಕ್ನಾಲಜೀಸ್ ಪ್ರೈ.ಲಿ. ಮಂಗಳೂರು | 166469 | 11.92 | 6154-164 dtd 29.08.2020 |
| 3 | ಉಡುಪಿ | 900 ದಿನಾಂಕ: 17.04.2020 | | 197149 | 11.92 | 6143-153 dtd 29.08.2020 |
| 4 | ಬಂಟ್ವಾಳ | 898/CALL-2 ದಿನಾಂಕ: 02.06.2020 | ಮೆ\|\| ಐಡಿಯಾ ಇನ್ಫಿನಿಟಿ ಐಟಿ ಸೊಲ್ಯೂಷನ್ಸ್ ಪ್ರೈ ಲಿ, ಬೆಂಗಳೂರು | 186760 | 11.12 | 5450-59 dtd 11.08.2020 |
| 5 | ಶಿವಮೊಗ್ಗ | 902 ದಿನಾಂಕ: 17.04.2020 | | 100108 | 11.92 | 4318-28 dtd 14.07.2020 |
| 6 | ಕಡೂರು | 908 ದಿನಾಂಕ: 17.04.2020 | | 26160 | 11.92 | 5460-70 dtd 11.08.2020 |
| 7 | ಪುತ್ತೂರು | 899/CALL-2 ದಿನಾಂಕ: 02.06.2020 | ಮೆ\|\| ಮಾನಸ ಎಲೆಕ್ಟ್ರಿಕಲ್ಸ್, ಚಿಕ್ಕಮಗಳೂರು | 121954 | 11.44 | 4727-36 dtd 31.07.2020 |
| 8 | ಕುಂದಾಪುರ | 901 ದಿನಾಂಕ: 17.04.2020 | ಮೆ\|\| ಮಹಾಲಿಂಗೇಶ್ವರ ಎಲೆಕ್ಟ್ರಿಕಲ್ಸ್, ಬಿಜೂರು, ಉಪ್ಪುಂದ | 101138 | 11.92 | 4625-35 dtd 28.07.2020 |
| 9 | ಭದ್ರಾವತಿ | 903 ದಿನಾಂಕ: 17.04.2020 | ಮೆ\|\| ಶ್ರೀ ಗಣೇಶ್ ಎಲೆಕ್ಟ್ರಿಕಲ್ಸ್, ಆಲ್ದೂರು | 14797 | 11.92 | 4039-49 dtd 04.07.2020 |
| 10 | ಶಿಕಾರಿಪುರ | 904 ದಿನಾಂಕ: 17.04.2020 | ಮೆ\|\| ಸಹ್ಯಾದ್ರಿ ಎಲೆಕ್ಟ್ರಿಕಲ್ಸ್, ಹೊಸನಗರ | 37025 | 11.92 | 4432-42 dtd 21.07.2020 |
| 11 | ಸಾಗರ | 905 ದಿನಾಂಕ: 17.04.2020 | | 54972 | 11.92 | 4443-53 dtd 21.07.2020 |
| 12 | ಚಿಕ್ಕಮಗಳೂರು | 906 ದಿನಾಂಕ: 17.04.2020 | ಮೆ\|\| ಲಕ್ಷ್ಮಿ ಎಲೆಕ್ಟ್ರಿಕಲ್ಸ್,ನಿಲುವಾಗಿಲು | 132210 | 11.92 | 4307-17 dtd 14.07.2020 |
| 13 | ಕೊಪ್ಪ | 907 ದಿನಾಂಕ: 17.04.2020 | | 62344 | 11.92 | 4401-411 dtd 08.07.2020 |